


# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ಗುರುತಿನ ಪ್ರಶ್ನೆ**

ದಿನಾಂಕ : 24-03-2021 ಪ್ರಶ್ನೆ ಸಂಖ್ಯೆ : 282 (2068)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 24-03-2021

ಉತ್ತರಿಸುವ ಸಚಿವರು: ಉಪ ಮುಖ್ಯಮಂತ್ರಿಗಳು ಹಾಗೂ ಲೋಕೋಪಯೋಗಿ ಸಚಿವರು

ವಿಷಯ : ರಾಜ್ಯ ಹೆದ್ದಾರಿಗಳಲ್ಲಿ ಫಾಸ್ಟ್ ಟ್ಯಾಗ್ ಮತ್ತು ಅವೈಜ್ಞಾನಿಕ ಟೋಲ್ ಶುಲ್ಕದಿಂದ ಸಾರ್ವಜನಿಕರಿಗೆ ಆಗುತ್ತಿರುವ ತೊಂದರೆ ಬಗ್ಗೆ

(ಅ) ರಾಜ್ಯ ಹೆದ್ದಾರಿಗಳಲ್ಲಿ ಕಡ್ಡಾಯ ಫಾಸ್ಟ್ ಟ್ಯಾಗ್ ಮತ್ತು ಅವೈಜ್ಞಾನಿಕ ಟೋಲ್ ಶುಲ್ಕದಿಂದ ಸಾರ್ವಜನಿಕರು ಟೋಲ್‌ಗಳಲ್ಲಿ ದಿನನಿತ್ಯ ಕಿರಿಕಿರಿ/ಗಲಾಟೆಗಳಿಂದ ಬೇಸತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಆ) ಹಾಗಿದ್ದಲ್ಲಿ, ಸಾರ್ವಜನಿಕರಿಗೆ ಟೋಲ್‌ಗಳಲ್ಲಿ ಅನಗ್ಯತ ಕಿರಿಕಿರಿ/ಗಲಾಟೆ ತಪ್ಪಿಸುವ ನಿಟ್ಟಿನಲ್ಲಿ ಸರ್ಕಾರ ತೆಗೆದುಕೊಂಡ ಕ್ರಮಗಳೇನು; (ವಿವರ ನೀಡುವುದು)

(ಇ) ಎಲ್ಲಾ ವಾಹನಗಳಿಗೂ ಫಾಸ್ಟ್ ಟ್ಯಾಗ್ ಕಡ್ಡಾಯಗೊಳಿಸಿ ಸುತ್ತೋಲೆ ಹೊರಡಿಸಿರುವುದು ಸರಿಯೇ; ಸದರಿ ಆದೇಶವನ್ನು ಮತ್ತೊಮ್ಮೆ ಪರಿಶೀಲಿಸಿ ಸರಿಪಡಿಸಲಾಗುವುದೇ; (ವಿವರ ಒದಗಿಸುವುದು)

(ಈ) ಫಾಸ್ಟ್ ಟ್ಯಾಗ್ ಹೊಂದಿಲ್ಲದ ವಾಹನಗಳಿಗೆ ದುಪ್ಪಟ್ಟು ಶುಲ್ಕ ವಿಧಿಸುತ್ತಿರುವುದು ಅವೈಜ್ಞಾನಿಕವೆಂದು ಸಾರ್ವಜನಿಕರು ಆಕ್ರೋಶ ಹೊರಹಾಕುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ:

(ಉ) ಸಾರ್ವಜನಿಕರಿಗೆ ಟೋಲ್‌ಗಳಲ್ಲಿ ಮತ್ತು ಟೋಲ್ ಸಿಬ್ಬಂದಿಯಿಂದ ಕಿರಿಕಿರಿ ತಪ್ಪಿಸಿ ಅನುಕೂಲ ಮಾಡಿಕೊಡುವ ಮತ್ತು ಟೋಲ್ ಸಂಚಾರ ವ್ಯವಸ್ಥೆ ಸರಾಗವಾಗಿ ಚಲಿಸುವಂತೆ

ಮಾಡಲು ಸರ್ಕಾರ ತೆಗೆದುಕೊಂಡ ಮತ್ತು ತೆಗೆದುಕೊಳ್ಳುವ ಕ್ರಮಗಳೇನು? (ವಿವರ ನೀಡುವುದು)